Reading Literacy : From International Perspective to Classroom Practice

ಭಾಷೆಯಲ್ಲಿನ ಮೌಲ್ಯಮಾಪನ

# ಓದುವ ಸಾಕ್ಷರತೆ: ಅಂತರರಾಷ್ಟ್ರೀಯ ದೃಷ್ಟಿಕೋನದಿಂದ ತರಗತಿ ಆಚರಣೆಯವರೆಗೆ

- ಜ್ಯೂಲಿಯಟ್ ಮೆಂಡಿಲೋವಿಟ್ಸ್

"ನಾವು ಕಲಿಯುವ ಮತ್ತು ಕಂಠಪಾಠ ಮಾಡುವ ಜನರನ್ನು ಉತ್ಪಾದಿಸುವಲ್ಲಿ ನೈಪುಣ್ಯ ಹೊಂದಿದ್ದೇವೆ. ಆದರೆ ಸೃಜನಶೀಲ ಅಥವಾ ಮೂಲ ಚಿಂತನೆಯ ಸಾಮರ್ಥ್ಯವನ್ನು ಹೊಂದಿರುವವರನ್ನು ಸೃಷ್ಟಿಸುವಲ್ಲಿ ಅಲ್ಲ." - ಸ್ಯಾಮ್ ಪಿತ್ರೋಡಾ, ರಾಷ್ಟ್ರೀಯ ಜ್ಞಾನ ಆಯೋಗದ ಮುಖ್ಯಸ್ಥ.

ಡಾ. ಪಿತ್ರೋಡಾ ಅವರ ಈ ಹೇಳಿಕೆಯು (ಧಿಲ್ಲೋನ್, ೨೦೦೯ರಲ್ಲಿ ಉಲ್ಲೇಖಿಸಲಾಗಿದೆ) ಶಿಕ್ಷಣದ ವಿಷಯದಲ್ಲಿ ಭಾರತವು ಅನುಸರಿಸುತ್ತಿರುವ ವಿಧಾನದಲ್ಲಿ ಯಾವುದೋ ಮೂಲಭೂತವಾದ ಕೊರತೆಯಿದೆ ಎಂಬುದನ್ನು ಸೂಚಿಸುತ್ತದೆ. ಕಲಿಯುವ ಮತ್ತು ಕಂಠಪಾಠ ಮಾಡುವ ಸಾಮರ್ಥ್ಯವು ಸಮಾಜಕ್ಕೆ ಅಗತ್ಯವಾದ ಶಕ್ತಿಯೇ ಎಂದು ಅಂಗೀಕರಿಸುತ್ತಲೇ, ಅವರ ಹೇಳಿಕೆಯು ಈ ಸಾಮರ್ಥ್ಯಗಳನ್ನು ಮೀರಿದ, ವಿಮರ್ಶಾತ್ಮಕ ಚಿಂತನೆ, ಪ್ರತಿಫಲನ, ಮತ್ತು ಸೃಜನಶೀಲತೆ (ಸೃಷ್ಟಿಸುವ ಸಾಮರ್ಥ್ಯಗಳು) ೨೧ನೇ ಶತಮಾನದಲ್ಲಿ ಸಂಪೂರ್ಣ ಮತ್ತು ನಿರಂತರ ಆರ್ಥಿಕ ಮತ್ತು ಸಾಮಾಜಿಕ ಅಭಿವೃದ್ಧಿಗೆ ಅತ್ಯಗತ್ಯ ಎಂದು ಸೂಚಿಸುತ್ತದೆ.

ತರಗತಿಯ ಶಿಕ್ಷಕರು "ಕಲಿಕೆ ಮತ್ತು ಕಂಠಪಾಠ"ಗಳನ್ನು ಮೀರಿದ ಸಾಮರ್ಥ್ಯವನ್ನು ಅಭಿವೃದ್ಧಿಪಡಿಸಿಕೊಳ್ಳಲು ತಮ್ಮ ವಿದ್ಯಾರ್ಥಿಗಳಿಗೆ ಹೇಗೆ ಸಹಾಯ ಮಾಡಬಹುದು? ಈ ಲೇಖನವು ಓದುವ ಸಾಕ್ಷರತೆಯ ದೊಡ್ಡ ಪ್ರಮಾಣದ ಅಂತರರಾಷ್ಟ್ರೀಯ ಮೌಲ್ಯಮಾಪನದಿಂದ ಪಡೆಯಬಹುದಾದ ಪಾಠಗಳ ಕಡೆ ಗಮನ ಹರಿಸುತ್ತದೆ. ಇದನ್ನು ಅಂತರರಾಷ್ಟ್ರೀಯ ವಿದ್ಯಾರ್ಥಿ ಮೌಲ್ಯಮಾಪನಕ್ಕಾಗಿ ಆರ್ಥಿಕ ಸಹಕಾರ ಮತ್ತು ಅಭಿವೃದ್ಧಿ ಸಂಸ್ಥೆಯ ಭಾಗವಾಗಿ ಮಾಡಲಾಗಿತ್ತು (OECD PISA). ಭಾರತವು ಇಲ್ಲಿಯವರೆಗೆ PISAದಲ್ಲಿ ಭಾಗವಹಿಸಿಲ್ಲವಾದರೂ, ಈ ಅಧ್ಯಯನದ ಓದುವ ವಿಧಾನವು ಭಾರತೀಯ ತರಗತಿಗಳಲ್ಲಿ ಓದುವುದರ ಕಲಿಕೆಗೆ ಮಾರ್ಗದರ್ಶನ ನೀಡಲು ಉಪಯುಕ್ತ ಮಾದರಿಯಾಗಬಹುದು.

PISAದ ಯಾವ ಮಾಹಿತಿಯು ಶಿಕ್ಷಕರಿಗೆ ಉಪಯುಕ್ತವಾಗಿದೆ? PISAದ ಓದುವ ಪರೀಕ್ಷೆಯು ಆಧರಿತವಾಗಿರುವ ಮೌಲ್ಯಮಾಪನದ ಚೌಕಟ್ಟನ್ನು, ಆ ಯೋಜನೆಯ ಅವಧಿಯಲ್ಲಿ, ಅಂತರರಾಷ್ಟ್ರೀಯ ಓದುವ ತಜ್ಞರ ಗುಂಪಿನಿಂದ ಅಭಿವೃದ್ಧಿಪಡಿಸಿ ಪರಿಷ್ಕರಿಸಲಾಗಿದೆ. ಹಾಗೂ ಭಾಗವಹಿಸಿದ್ದ ದೇಶಗಳ ಬಹುಸಂಖ್ಯೆಯ ಶಿಕ್ಷಣತಜ್ಞರು ಮತ್ತು ಶಿಕ್ಷಕರ ಪ್ರತಿಕ್ರಿಯೆ(Feedback)ಯಿಂದ ಮಾರ್ಗದರ್ಶನ ಪಡೆಯಲಾಗಿದೆ. ಓದುವಿಕೆ ಎಂದರೇನು ಮತ್ತು ಕಡ್ಡಾಯ ಶಾಲಾ ಶಿಕ್ಷಣದ ಅಂತ್ಯದ ವೇಳೆಗೆ ಓದುಗರಾಗಿ ಯುವಜನರು ಏನನ್ನು ತಿಳಿದುಕೊಳ್ಳಬೇಕು ಮತ್ತು ಏನನ್ನು ಮಾಡಲು ಸಾಧ್ಯವಾಗಬೇಕು ಎಂಬುದರ ಕುರಿತು ಪ್ರಪಂಚದ ಪ್ರಸ್ತುತ ಅತ್ಯುತ್ತಮ ಚಿಂತನೆಯನ್ನು ಈ ಮೌಲ್ಯಮಾಪನವು ಪ್ರತಿನಿಧಿಸುತ್ತದೆ. PISAದ ವ್ಯಾಖ್ಯಾನದ ಪ್ರಕಾರ, ಪ್ರವೀಣ ಓದುಗರೆಂದರೆ, ಸ್ವತಃ ಮಾಹಿತಿಯನ್ನು ಹುಡುಕಲು, ಅದನ್ನು ಅರ್ಥೈಸಲು ಮತ್ತು ವಿವಿಧ ಉದ್ದೇಶಗಳಿಗಾಗಿ ಅದರ ಗುಣಮಟ್ಟ, ವಿಶ್ವಾಸಾರ್ಹತೆ ಮತ್ತು ಉಪಯುಕ್ತತೆಯ ಬಗ್ಗೆ ವಿಮರ್ಶಾತ್ಮಕ ತೀರ್ಪುಗಳನ್ನು ಮಾಡುವ ಸಾಮರ್ಥ್ಯ ಮತ್ತು ಆತ್ಮವಿಶ್ವಾಸವನ್ನು ಹೊಂದಿರುತ್ತಾರೆ. ಆದ್ದರಿಂದ ಓದುವಿಕೆಯನ್ನು PISA "ತಮ್ಮ ಗುರಿಗಳನ್ನು ಸಾಧಿಸಲು, ಜ್ಞಾನ ಮತ್ತು ಸಾಮರ್ಥ್ಯವನ್ನು ಅಭಿವೃದ್ಧಿಪಡಿಸಲು ಮತ್ತು ಸಮಾಜದಲ್ಲಿ ಭಾಗವಹಿಸುವ ಕಾರಣಕ್ಕಾಗಿ ಲಿಖಿತ ಪಠ್ಯಗಳನ್ನು ಅರ್ಥಮಾಡಿಕೊಳ್ಳುವುದು, ಬಳಸುವುದು, ಅವುಗಳ ಮೇಲೆ ಪ್ರತಿಫಲಿಸುವುದು ಮತ್ತು ಅವುಗಳೊಂದಿಗೆ ತೊಡಗಿಕೊಳ್ಳುವುದು" ಎಂದು ವ್ಯಾಖ್ಯಾನಿಸುತ್ತದೆ (OECD, ೧೯೯೯, ೨೦೦೬, ಮುದ್ರಿತವಾಗಲಿದೆ).

ಮೌಲ್ಯಮಾಪನ ಸಾಧನದ ರೂಪದಲ್ಲಿ ಈ ವ್ಯಾಖ್ಯಾನವನ್ನು ಕಾರ್ಯಗತಗೊಳಿಸುವ ವಿಷಯ ಬಂದಾಗ, PISA ಹಲವಾರು ಸನ್ನಿವೇಶಗಳು, ಪಠ್ಯ ಸ್ವರೂಪಗಳು ಮತ್ತು ಪ್ರಕಾರಗಳು ಮತ್ತು ಪ್ರಕ್ರಿಯೆಗಳ ವ್ಯಾಪ್ತಿಯನ್ನು ಗುರುತಿಸುತ್ತದೆ. ಹಾಗೂ ಪ್ರತಿಯೊಂದು ಚರಾಂಶ(variable)ಗಳಿಗೆ ಮೌಲ್ಯಮಾಪನ ಪ್ರಶ್ನೆಗಳ ಪೂರ್ವ-ನಿರ್ಧರಿತ ಸಂಖ್ಯೆಯನ್ನು ನಿಯೋಜಿಸಲಾಗುತ್ತದೆ. ಇದರ ಉದ್ದೇಶ ಓದುವಿಕೆಯ ಎಲ್ಲಾ ಪ್ರಮುಖ ಅಂಶಗಳನ್ನು ಸೂಕ್ತವಾಗಿ ಪ್ರತಿನಿಧಿಸಲಾಗಿದೆಯೇ ಎಂದು ಖಚಿತಪಡಿಸಿಕೊಳ್ಳುವುದು. ನಂತರದಲ್ಲಿ ಈ ಪ್ರತಿಯೊಂದು ಚರಾಂಶಗಳ ವರ್ಗಕ್ಕೆ ಸಂಬಂಧಿಸಿದಂತೆ ವಿದ್ಯಾರ್ಥಿಗಳು ಎಷ್ಟರ ಮಟ್ಟಿಗೆ ಪ್ರಾವೀಣ್ಯ ಪ್ರದರ್ಶಿಸಿದ್ದಾರೆ ಎಂಬ ಆಧಾರದ ಮೇಲೆ ಫಲಿತಾಂಶಗಳನ್ನು ವ್ಯಾಖ್ಯಾನಿಸುವುದು.

ನಾನು ಓದುವಿಕೆಯು ಸಂಸ್ಕರಿಸುವ ಪ್ರಕ್ರಿಯೆಗಳಲ್ಲಿ PISA ಚರಾಂಶಗಳಲ್ಲಿ ಒಂದರ ಬಗೆಗೆ ಸ್ವಲ್ಪ ವಿವರವಾಗಿ ಗಮನ ಹರಿಸಲು ಬಯಸುತ್ತೇನೆ.

PISA ಓದುವಿಕೆಯ ಐದು ಪ್ರಕ್ರಿಯೆಗಳು ಅಥವಾ “ಅಂಶಗಳನ್ನು” ಪ್ರತಿಪಾದಿಸುತ್ತದೆ: ಮಾಹಿತಿಯನ್ನು ಸ್ಮರಿಸುವಿಕೆ, ವಿಶಾಲವಾದ ಗ್ರಹಿಕೆಯನ್ನು ರೂಪಿಸುವಿಕೆ, ವ್ಯಾಖ್ಯಾನವನ್ನು ರೂಪಿಸುವಿಕೆ, ಪಠ್ಯದ ವಿಷಯದ ಮೇಲೆ ಪ್ರತಿಫಲಿಸುವಿಕೆ ಮತ್ತು ಪಠ್ಯದ ಸ್ವರೂಪದ ಮೇಲೆ ಪ್ರತಿಫಲಿಸುವಿಕೆ. PISA ಓದುವಿಕೆಯಲ್ಲಿನ ಪ್ರತಿಯೊಂದು ಕಾರ್ಯವು ಈ ಐದು ಅಂಶಗಳಲ್ಲಿ ಒಂದನ್ನು ಸಂಬೋಧಿಸಲು ವಿನ್ಯಾಸಗೊಳಿಸಲಾಗಿದೆ:

- ಮಾಹಿತಿ ಸ್ಮರಣೆಯ ಪ್ರಶ್ನೆಗಳು ಪಠ್ಯದಲ್ಲಿನ ಪ್ರತ್ಯೇಕವಾದ ಮಾಹಿತಿಯ ತುಣುಕುಗಳನ್ನು ಪತ್ತೆಹಚ್ಚುವಲ್ಲಿ ಓದುಗನನ್ನು ಕೇಂದ್ರೀಕರಿಸುತ್ತದೆ.

- ವಿಶಾಲವಾದ ಗ್ರಹಿಕೆಯನ್ನು ರೂಪಿಸುವ ಮತ್ತು ವ್ಯಾಖ್ಯಾನವನ್ನು ರೂಪಿಸುವ ಕಾರ್ಯಗಳು(Tasks) ಪಠ್ಯದೊಳಗಿನ ಸಂಬಂಧಗಳ ಮೇಲೆ ಓದುಗನನ್ನು ಕೇಂದ್ರೀಕರಿಸುತ್ತದೆ. ಇಡೀ ಪಠ್ಯದ ಮೇಲೆ ಕೇಂದ್ರೀಕರಿಸುವ ಕಾರ್ಯಗಳು ಓದುಗರು ವಿಶಾಲವಾದ ತಿಳುವಳಿಕೆಯನ್ನು ರೂಪಿಸಬೇಕಾಗುತ್ತದೆ; ಪಠ್ಯದ ಭಾಗಗಳ ನಡುವಿನ ಸಂಬಂಧಗಳ ಮೇಲೆ ಕೇಂದ್ರೀಕರಿಸುವ ಕಾರ್ಯಗಳು ವ್ಯಾಖ್ಯಾನವನ್ನು ರೂಪಿಸಬೇಕಾಗುತ್ತದೆ.

- ವಿಷಯದ ಮೇಲೆ ಪ್ರತಿಫಲಿಸುವ ಕಾರ್ಯಗಳು ಪಠ್ಯದ ಭಾವಕಲ್ಪನೆಯ(Ideation) ವಸ್ತುವಿಗೆ ಸಂಬಂಧಿಸಿದೆ.

- ಸ್ವರೂಪದ ಮೇಲೆ ಪ್ರತಿಫಲಿಸುವ ಕಾರ್ಯಗಳು ಪಠ್ಯದ ರಚನೆ ಅಥವಾ ರೂಪಲಕ್ಷಣಗಳಿಗೆ ಸಂಬಂಧಿಸಿದೆ.

ಓದುವಿಕೆಯ ಈ ಐದು ಅಂಶಗಳನ್ನು ಸಂಗ್ರಹಿಸುವ ಉದ್ದೇಶಕ್ಕಾಗಿ ಮೂರು ಅಂಶಗಳಾಗಿ ಸಂಕುಚಿತಗೊಳಿಸಲಾಗಿದೆ: ಪ್ರವೇಶ ಮತ್ತು ಸ್ಮರಣೆ, ಸಂಯೋಜನೆ ಮತ್ತು ವ್ಯಾಖ್ಯಾನ, ಮತ್ತು ಪ್ರತಿಫಲನ ಮತ್ತು ಮೌಲ್ಯಮಾಪನ.

ಓದುವ ಸಾಕ್ಷರತೆ

ಪ್ರಾಥಮಿಕವಾಗಿ ಪಠ್ಯದ ಒಳಗಿನ ಪ್ರಾಥಮಿಕವಾಗಿ ಹೊರಗಿನ

ವಿಷಯವನ್ನು ಬಳಸಿ ಜ್ಞಾನದಿಂದ ಸ್ವೀಕರಿಸಿ

ಪ್ರವೇಶ ಮತ್ತು ಸ್ಮರಣೆ ಯೋಚಿಸು ಮತ್ತು

ಮೌಲ್ಯಮಾಪನ ಮಾಡು

ಮಾಹಿತಿಯ ಸ್ಮರಣೆ

ಸಂಯೋಜನೆ ಮತ್ತು ವ್ಯಾಖ್ಯಾನ

ವಿಶಾಲವಾದ ಗ್ರಹಿಕೆಯನ್ನು ವ್ಯಾಖ್ಯಾನವನ್ನು

ರೂಪಿಸು ರೂಪಿಸು

,

ಪಠ್ಯದ ವಸ್ತುವಿನ ಮೇಲೆ ಯೋಚಿಸು ಮತ್ತು ಮೌಲ್ಯಮಾಪನ ಮಾಡು

ಪಠ್ಯದ ಸ್ವರೂಪದ ಮೇಲೆ ಯೋಚಿಸು ಮತ್ತು ಮೌಲ್ಯಮಾಪನ ಮಾಡು

ಮೇಲಿನ ರೇಖಾಚಿತ್ರವು ಈ ಅಂಶಗಳ ಕೇಂದ್ರವನ್ನು ಮತ್ತು ಅವುಗಳ ನಡುವಿನ ಸಂಬಂಧವನ್ನು ಸಾರಾಂಶೀಕರಿಸುತ್ತದೆ.

ರೇಖಾಚಿತ್ರವು ತೋರಿಸಿರುವಂತೆ, ಚರಾಂಶದ ಸಂಗತಿಯಲ್ಲಿ, ಪ್ರವೇಶ ಮತ್ತು ಸ್ಮರಣೆ ಮತ್ತು ಸಂಯೋಜನೆ ಮತ್ತು ವ್ಯಾಖ್ಯಾನದ ವಿಷಯಗಳೆರಡೂ ಪಠ್ಯದ ಒಳಗಿನ ವಿಷಯಗಳಿಂದ ಬಂದರೆ, ಪ್ರತಿಫಲನದ(ಯೋಚಿಸುವ) ಮತ್ತು ಮೌಲ್ಯಮಾಪನದ ವಿಷಯಗಳು ಪ್ರಾಥಮಿಕವಾಗಿ ಹೊರಗಿನ ಜ್ಞಾನದಿಂದ ಪಡೆದುದನ್ನು ಪಠ್ಯಕ್ಕೆ ಸಂಬಂಧಿಸುವಂತೆ ಓದುಗರನ್ನು ಕೇಳುತ್ತವೆ. ಎಲ್ಲಾ ಮೂರು ಅಂಶಗಳನ್ನು ಪ್ರವೀಣ ಓದುಗನು ಅಭ್ಯಸಿಸಬೇಕಾದರೂ, ಪ್ರತಿಫಲನದ (ಯೋಚಿಸುವ) ಮತ್ತು ಮೌಲ್ಯಮಾಪನದ ಅಂಶವು ಈ ಲೇಖನದ ಆರಂಭದಲ್ಲಿ ಉಲ್ಲೇಖಿಸಲಾದ ವ್ಯಾಖ್ಯೆಯ ಬೆಳಕಿನಲ್ಲಿ ನೋಡುವುದಾದರೆ, ಒಂದು ನಿರ್ದಿಷ್ಟ ಆಸಕ್ತಿಯನ್ನು ಹೊಂದಿದೆ. ಏಕೆಂದರೆ ಇದು ಪ್ರಸ್ತುತ ಭಾರತೀಯ ಶಿಕ್ಷಣದಲ್ಲಿ ಪದವೀಧರರ ಕಲಿಕೆ ಮತ್ತು ಕಂಠಪಾಠವನ್ನು ಮೀರಿ, ಸ್ಯಾಮ್

ಪಿತ್ರೋಡಾ ಕೊರತೆಯಾಗಿ ಗುರುತಿಸುವ, ಮೂಲ ಚಿಂತನೆಯ ಕಡೆಗೆ ಓದುಗನನ್ನು ಸ್ಪಷ್ಟವಾಗಿ ಮುನ್ನಡೆಸುತ್ತದೆ. ಇದು ಪಠ್ಯದಿಂದ ಮಾಹಿತಿಯನ್ನು ಪುನರಾವರ್ತಿಸುವುದಕ್ಕಿಂತ ಹೆಚ್ಚಿನದನ್ನು ಮಾಡಲು ಓದುಗರಿಂದ ಬಯಸುತ್ತದೆ ಮತ್ತು ಪಠ್ಯದೊಳಗಿನ ಸಂಬಂಧಗಳನ್ನು ಮರು-ರಚನೆ, ಸಂಶ್ಲೇಷಣೆ ಅಥವಾ ಗ್ರಹಣೆ ಮಾಡುವುದಕ್ಕಿಂತ ಹೆಚ್ಚಿನದನ್ನು ಮಾಡುವುದನ್ನು ಅಪೇಕ್ಷಿಸುತ್ತದೆ. ಬದಲಿಗೆ, ಓದುಗರು ತಮ್ಮ ಅನುಭವ ಅಥವಾ ಜ್ಞಾನದೊಂದಿಗೆ ಸಮಾಲೋಚಿಸುವ ಮೂಲಕ ಪ್ರತಿಕ್ರಿಯೆಯನ್ನು ರಚಿಸಲು ಮತ್ತು ಪಠ್ಯಕ್ಕೆ ಪ್ರತಿಕ್ರಿಯಿಸುವಂತೆ ಆ ಅಂಶಗಳನ್ನು ಬಳಸಬೇಕಾಗುತ್ತದೆ.

PISO ಕಾರ್ಯಗಳ ಕೆಲವು ಉದಾಹರಣೆಗಳು ಈ ಕೆಳಗಿನಂತಿವೆ.  ವಿವಿಧ ರೀತಿಯ ಪ್ರತಿಫಲನ ಮತ್ತು ಮೌಲ್ಯಮಾಪನದ ಪ್ರಶ್ನೆಗಳನ್ನು ವಿವರಿಸಲು ಅವುಗಳನ್ನು ಪ್ರಾಥಮಿಕವಾಗಿ ಆಯ್ಕೆ ಮಾಡಲಾಗಿದೆ. ಆದರೆ ಅವು PISO ದಲ್ಲಿ ಕಂಡುಬರುವ ಪಠ್ಯ ಪ್ರಕಾರಗಳು ಮತ್ತು ಪ್ರಶ್ನೆ ಸ್ವರೂಪಗಳ  ಶ್ರೇಣಿಯನ್ನು ಸಹ ತೋರಿಸುತ್ತವೆ. ಹಾಗಾಗಿ ಇವು ಶಿಕ್ಷಕರು ಬೋಧಿಸುತ್ತಿರುವ ಓದುವ ಪಠ್ಯಗಳಿಗೆ ಸಂಬಂಧಿಸಿದ ಕಾರ್ಯಗಳನ್ನು ಅಭಿವೃದ್ಧಿಪಡಿಸುವಲ್ಲಿ ಅವರಿಗೆ ಮಾದರಿಗಳಾಗಿ ಕಾರ್ಯನಿರ್ವಹಿಸಬಲ್ಲವು.

ಮೊದಲ ಕಾರ್ಯವು(Task) ಗೋಡೆಯ ಮೇಲೆ ರೇಖಾಚಿತ್ರ ಬಿಡಿಸುವ ಬಗೆಗಿನ ಎರಡು ಪತ್ರಗಳನ್ನು ಆಧರಿಸಿದೆ. ಅವು ವಿರುದ್ಧವಾದ ಅಭಿಪ್ರಾಯಗಳನ್ನು ಪ್ರಸ್ತುತಪಡಿಸುತ್ತವೆ- ಒಂದು (ಹೆಲ್ಗಾರ ಪತ್ರ) ಗೋಡೆಯ ಮೇಲೆ ರೇಖಾಚಿತ್ರ ಬಿಡಿಸುವುದನ್ನು ಸಾರ್ವಜನಿಕ ಉಪದ್ರವವೆಂದು ವಾದಿಸಿದರೆ ಇನ್ನೊಂದು (ಸೋಫಿಯಾರ ಪತ್ರ) ಅದು ಒಂದು ರೀತಿಯ ಕಲೆ ಎಂದು ವಾದಿಸುತ್ತದೆ.

‘ಈ ಇಬ್ಬರು ಪತ್ರ ಬರೆದವರಲ್ಲಿ ಯಾರನ್ನು ನೀವು ಒಪ್ಪುತ್ತೀರಿ? ಒಂದು ಅಥವಾ ಎರಡೂ ಪತ್ರಗಳಲ್ಲಿ ಏನನ್ನು ಹೇಳಲಾಗಿದೆ ಎಂಬದನ್ನು ಉಲ್ಲೇಖಿಸಲು ನಿಮ್ಮ ಸ್ವಂತ ಪದಗಳನ್ನು ಬಳಸಿಕೊಂಡು ನಿಮ್ಮ ಉತ್ತರವನ್ನು ವಿವರಿಸಿ’.

ಪ್ರಸ್ತುತಪಡಿಸಿದ ಪಠ್ಯಗಳಿಗೆ ಸಂಬಂಧಿಸಿದಂತೆ ವಿಷಯದ ಬಗ್ಗೆ ವೈಯಕ್ತಿಕ ಅಭಿಪ್ರಾಯವನ್ನು ವ್ಯಕ್ತಪಡಿಸಲು ಈ ಕಾರ್ಯವು ಓದುಗರನ್ನು ಕೇಳುತ್ತದೆ. ಸಂಪೂರ್ಣ ಶ್ರೇಯವನ್ನು ಗಳಿಸಿದ ಕೆಲವು ವಿದ್ಯಾರ್ಥಿಗಳ ಪ್ರತಿಕ್ರಿಯೆಗಳು ಇಲ್ಲಿವೆ:

- ನಾನು ಹೆಲ್ಗಾರನ್ನು ಒಪ್ಪುತ್ತೇನೆ. ಗೋಡೆಯ ಮೇಲೆ ರೇಖಾಚಿತ್ರ ಬಿಡಿಸುವುದು ಕಾನೂನುಬಾಹಿರವಾಗಿದ್ದು ಅದು ಗೋಡೆಯನ್ನು ವಿಧ್ವಂಸಗೊಳಿಸುತ್ತದೆ.
- ನಾನು ಹೆಲ್ಗಾರನ್ನು ಒಪ್ಪುತ್ತೇನೆ. ಏಕೆಂದರೆ ನಾನು ಗೋಡೆಯ ಮೇಲೆ ರೇಖಾಚಿತ್ರ ಬಿಡಿಸುವುದರ ವಿರುದ್ಧವಾಗಿದ್ದೇನೆ.
- ನಾನು ಸೋಫಿಯಾರನ್ನು ಒಪ್ಪುತ್ತೇನೆ. ಏಕೆಂದರೆ ಗೋಡೆಯ ಮೇಲೆ ರೇಖಾಚಿತ್ರ ಬಿಡಿಸುವ ಕಲಾವಿದರಿಗೆ ದಂಡ ಹಾಕಿ ನಂತರದಲ್ಲಿ ಅವರ ವಿನ್ಯಾಸಗಳನ್ನು ನಕಲಿಸುವ ಮೂಲಕ ಲಕ್ಷಾಂತರ ಗಳಿಸುವುದು ಬೂಟಾಟಿಕೆ ಎಂದು ನಾನು ಭಾವಿಸುತ್ತೇನೆ.
- ನಾನು ಇಬ್ಬರ ಪತ್ರಗಳನ್ನೂ ತಕ್ಕ ಮಟ್ಟಿಗೆ ಒಪ್ಪುತ್ತೇನೆ. ಸಾರ್ವಜನಿಕ ಸ್ಥಳಗಳಲ್ಲಿ ಗೋಡೆಗಳ ಮೇಲೆ ಬಣ್ಣ ಬಳಿಯುವುದು ಕಾನೂನುಬಾಹಿರ. ಆದರೆ ಈ ಜನರು ತಮ್ಮ ಕೆಲಸವನ್ನು ಬೇರೆಡೆ ಮಾಡಲು ಅವಕಾಶವನ್ನು ನೀಡಬೇಕು.
- ನಾನು ಸೋಫಿಯಾರನ್ನು ಒಪ್ಪುತ್ತೇನೆ. ಏಕೆಂದರೆ ಅವರು ಕಲೆಯ ಬಗ್ಗೆ ಕಾಳಜಿ ಹೊಂದಿದ್ದಾರೆ.

ಈ ಉದಾಹರಣೆಗಳು ವಿದ್ಯಾರ್ಥಿಯು ಯಾವ ಪತ್ರ-ಬರಹಗಾರನನ್ನು ಒಪ್ಪಿ ಆರಿಸಿಕೊಂಡರು ಎಂಬುದನ್ನು ಮೀರಿ ಅನೇಕ ರೀತಿಯ ಉತ್ತರಗಳು ಸಂಪೂರ್ಣ ಶ್ರೇಯವನ್ನು ಪಡೆಯಬಹುದು ಎಂದು ತೋರಿಸಿಕೊಡುತ್ತದೆ. ಈ ಪ್ರತಿಸ್ಪಂದನೆಯು ಪತ್ರ-ಬರಹಗಾರರ ನಿಲುವಿನ ಒಂದು ಸಂಭವನೀಯ ವ್ಯಾಖ್ಯಾನವನ್ನು ಒದಗಿಸುತ್ತದೆ ಮತ್ತು ಆ ವ್ಯಾಖ್ಯಾನದೊಂದಿಗಿನ ಸ್ಥಿರವಾದ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತದೆ.

ಎರಡನೆಯ ಉದಾಹರಣೆಯು “ದಿ ಗಿಫ್ಟ್” ಎಂಬ ಕಥೆಯನ್ನು  ಆಧರಿಸಿದೆ. ಇದು ಪ್ರತ್ಯೇಕವಾಗಿ ಪ್ರವಾಹದಲ್ಲಿ ಸಿಲುಕಿರುವ ಮಹಿಳೆ ಮತ್ತು ಹೆಬ್ಬಾವಿನ ಬಗೆಗಿನ ಸಂಪೂರ್ಣ ಸಣ್ಣ ಕಥೆಯಾಗಿದೆ. ಹೆಬ್ಬಾವಿನ ಕುರಿತು ಮಹಿಳೆಯ ಪ್ರತಿಸ್ಪಂದನೆಯು ಭಯ ಮತ್ತು

ಹಗೆತನದಿಂದ ಹಿಡಿದು ನೊಂದ ಸಹಚರರ ಬಗೆಗಿನ ಸಹಾನುಭೂತಿಯಾಗಿ ಹೇಗೆ ಬದಲಾಗುತ್ತದೆ ಎಂಬುದನ್ನು ಕಥೆಯು ಗುರುತಿಸುತ್ತದೆ. ಹಲವಾರು ಪ್ರಶ್ನೆಗಳಲ್ಲಿ ಒಂದು ಈ ಕೆಳಗಿನಂತೆ ಇದೆ:

"ದಿ ಗಿಫ್ಟ್"ನ ಕೊನೆಯ ವಾಕ್ಯವು ಸೂಕ್ತ ಅಂತ್ಯವಾಗಿದೆ ಎಂದು ನೀವು ಭಾವಿಸುತ್ತೀರಾ? ಕೊನೆಯ ವಾಕ್ಯವು ಕಥೆಯ ಅರ್ಥಕ್ಕೆ ಹೇಗೆ ಸಂಬಂಧಿಸಿದೆ ಎಂಬುದಕ್ಕೆ ಉತ್ತರಿಸುವ ಮೂಲಕ ನಿಮ್ಮ ತಿಳುವಳಿಕೆಯನ್ನು ಪ್ರದರ್ಶಿಸಿ".

ವಿದ್ಯಾರ್ಥಿಗಳನ್ನು ಇಲ್ಲಿ ಪಠ್ಯದ ಒಂದು ಭಾಗವನ್ನು ಮೌಲ್ಯಮಾಪನ ಮಾಡಲು ಆಹ್ವಾನಿಸಲಾಗಿದೆ. ಅವರು ಕಥೆಯ ಕೊನೆಯ ವಾಕ್ಯವನ್ನು ಕೇಂದ್ರೀಯ ಸಂಬಂಧಗಳು, ಸಮಸ್ಯೆಗಳು ಅಥವಾ ಕಥೆಯಲ್ಲಿನ ರೂಪಕಗಳಿಗೆ ಸಂಬಂಧಿಸುವುದರ ಮೂಲಕ ಹಾಗೆ ಮಾಡಬೇಕು. ಕಥಾವಸ್ತುವಿನ ಸಂಪೂರ್ಣತೆಯ ಆಧಾರದ ಮೇಲೆ ಅಂತ್ಯವು ಸೂಕ್ತವಾಗಿದೆ ಅಥವಾ ಅನುಚಿತವಾಗಿದೆ ಎಂದು ಸೂಚಿಸುವ ಮೂಲಕ ವಿದ್ಯಾರ್ಥಿಗಳು ತಮ್ಮ ಉತ್ತರಕ್ಕೆ ಪೂರ್ಣ ಶ್ರೇಯವನ್ನು ಪಡೆಯಬಹುದು: ಪಠ್ಯದ ಸಮಂಜಸವಾದ ಓದುವಿಕೆಯಲ್ಲಿ ಪ್ರತಿಸ್ಪಂದನೆಯು ಎಷ್ಟರ ಮಟ್ಟಿಗೆ ಸಮರ್ಥನೀಯವಾಗಿದೆ ಮತ್ತು ಆಧಾರಸಹಿತವಾಗಿದೆ ಎಂಬುದರ ಮೇಲೆ ಸ್ಕೋರಿಂಗ್ ನಿರ್ಧರಿತವಾಗುತ್ತದೆ.

ಮೂರನೆಯ ಉದಾಹರಣೆಯು ರಾಷ್ಟ್ರೀಯ ಕಾರ್ಮಿಕ ಬಲದ (ಉದ್ಯೋಗಿ, ನಿರುದ್ಯೋಗಿ ಮತ್ತು ಉಪವರ್ಗಗಳ) ರಚನೆ ಮತ್ತು ವಿತರಣೆಯನ್ನು ತೋರಿಸುವ ಮರದ ರೇಖಾಚಿತ್ರವನ್ನು ಒಳಗೊಂಡಿರುವ ಪ್ರಚೋದಕ ತುಣುಕಿಗೆ ಸಂಬಂಧಿಸಿದೆ: "ಕಾರ್ಮಿಕ ಬಲದ ರಚನೆಯ ಬಗ್ಗೆ ಮಾಹಿತಿಯನ್ನು ಮರದ ರೇಖಾಚಿತ್ರವಾಗಿ ಪ್ರಸ್ತುತಪಡಿಸಲಾಗಿದೆ. ಆದರೆ ಅದನ್ನು ಬರವಣಿಗೆ ರೂಪದ ವಿವರಣೆ, ಪೈ ಚಾರ್ಟ್ (ವರ್ತುಲ ರೇಖಾಪಟ), ಗ್ರಾಫ್ ಅಥವಾ ಕೋಷ್ಟಕ- ಹೀಗೆ ಹಲವಾರು ಇತರ ವಿಧಾನಗಳಲ್ಲಿ ಪ್ರಸ್ತುತಪಡಿಸಬಹುದು. ಮರದ ರೇಖಾಚಿತ್ರವನ್ನು ಬಹುಶಃ ವಿಶೇಷವಾಗಿ ಈ ಕೆಳಗಿನವುಗಳನ್ನು ತೋರಿಸಲು ಆಯ್ಕೆಮಾಡಲಾಗಿದೆ,

೧. ಕಾಲಾನಂತರದ ಬದಲಾವಣೆಗಳು

೨. ದೇಶದ ಒಟ್ಟು ಜನಸಂಖ್ಯೆಯ ಗಾತ್ರ

೩. ಪ್ರತಿ ಗುಂಪಿನೊಳಗಿನ ವರ್ಗಗಳು

೪. ಪ್ರತಿ ಗುಂಪಿನ ಗಾತ್ರ".

ಈ ಬಹು-ಆಯ್ಕೆ ಕಾರ್ಯಕ್ಕೆ ಪಠ್ಯದ ಸ್ವರೂಪದ ಮೌಲ್ಯಮಾಪನದ ಅಗತ್ಯವಿದೆ. ಇತರ ಪ್ರಕಾರದ ಪ್ರಸ್ತುತಿಗಳಿಗೆ ಹೋಲಿಸಿದರೆ ನಿರ್ದಿಷ್ಟ ಉದ್ದೇಶಗಳಿಗಾಗಿ ಮರದ ರೇಖಾಚಿತ್ರದ ಸೂಕ್ತತೆಯನ್ನು ಪರಿಗಣಿಸುವುದು ಇಲ್ಲಿ ನೀಡಿರುವ ಕಾರ್ಯವಾಗಿದೆ. ಪಠ್ಯದ ರಚನೆಯ ಸ್ಪಷ್ಟ ತಿಳುವಳಿಕೆಯನ್ನು ಓದುಗರು ಪ್ರದರ್ಶಿಸುವ ಅಗತ್ಯವಿದೆ.

ಅಂತಿಮವಾಗಿ, ನಾಲ್ಕನೇ ಕಾರ್ಯಕ್ಕೆ ಅಂತರರಾಷ್ಟ್ರೀಯ ನೆರವಿನ ಏಜೆನ್ಸಿ- (ಇಂಟರ್‌ನ್ಯಾಶನಲ್ ಏಡ್ ಏಜೆನ್ಸಿ) PLAN ಇಂಟರ್‌ನ್ಯಾಷನಲ್- ನೀಡುವ ಕಾರ್ಯಕ್ರಮಗಳ ಬಗೆಗಳ ಬಗ್ಗೆ ಮಾಹಿತಿಯನ್ನು ಹೊಂದಿರುವ ಕೋಷ್ಟಕದ ಮೇಲೆ ಪ್ರತಿಫಲಿಸುವ ಅಗತ್ಯವಿದೆ. ವಸ್ತುವನ್ನು ಏಜೆನ್ಸಿಯು ವಿತರಿಸಿರುವ ಸಾರ್ವಜನಿಕ ವರದಿಯಿಂದ ತೆಗೆದುಕೊಳ್ಳಲಾಗಿದೆ. PLAN ಇಂಟರ್‌ನ್ಯಾಷನಲ್ ಕಾರ್ಯಾಚರಣೆಯ ಒಂದು ಪ್ರದೇಶದಲ್ಲಿನ ದೇಶಗಳನ್ನು, ಅದು ನೀಡುವ ಸಹಾಯ ಕಾರ್ಯಕ್ರಮಗಳ ಪ್ರಕಾರ ಮತ್ತು ಸಹಾಯದ ಪ್ರತಿಯೊಂದು ವರ್ಗದೊಳಗೆ ಪ್ರತಿ ದೇಶದಲ್ಲಿ ಸಾಧಿಸಲಾದ ಕೆಲಸದ ಪ್ರಮಾಣವನ್ನು ಕೋಷ್ಟಕವು ತೋರಿಸುತ್ತದೆ. ಕೋಷ್ಟಕದಲ್ಲಿ ತೋರಿಸಲಾಗಿರುವ ಗ್ರಾಹಕ ದೇಶಗಳಲ್ಲಿ, ಇಥಿಯೋಪಿಯಾವು ಕಡಿಮೆ ಪ್ರಮಾಣದ ಸಹಾಯವನ್ನು ಪಡೆದಿದೆ ಎಂಬುದು ಸ್ಪಷ್ಟವಾಗಿದೆ. ಪ್ರಶ್ನೆ ಹೀಗಿದೆ:

"೧೯೯೬ರಲ್ಲಿ, ಇಥಿಯೋಪಿಯಾ ವಿಶ್ವದ ಅತ್ಯಂತ ಬಡ ದೇಶಗಳಲ್ಲಿ ಒಂದಾಗಿತ್ತು.

ಈ ಸತ್ಯವನ್ನು  ಮತ್ತು ಕೋಷ್ಟಕದಲ್ಲಿನ ಮಾಹಿತಿಯನ್ನು ಗಣನೆಗೆ ತೆಗೆದುಕೊಂಡು, ಇತರ ದೇಶದಲ್ಲಿನ ಚಟುವಟಿಕೆಗಳೊಂದಿಗೆ ತುಲನೆ ಮಾಡಿದಾಗ, ಇಥಿಯೋಪಿಯಾದಲ್ಲಿ PLAN ಇಂಟರ್‌ನ್ಯಾಷನಲ್‌ನ ಚಟುವಟಿಕೆಗಳ ಮಟ್ಟವನ್ನು ಯಾವ ಸಂಗತಿ ವಿವರಿಸಬಹುದು ಎಂದು ನೀವು ಭಾವಿಸುತ್ತೀರಿ?"

ಈ ಕಾರ್ಯಕ್ಕಾಗಿ, ವಿದ್ಯಾರ್ಥಿಗಳು ಪಠ್ಯದ ವಿಷಯದ ಬಗ್ಗೆ ಪೂರ್ವಸಿದ್ಧಾಂತವನ್ನು ಊಹಿಸಿ ರಚಿಸಬೇಕು(Hypothesize). ಅವರು  ವಿಶೇಷ ಜ್ಞಾನದಿಂದ ಪಡೆದು ನಿರೀಕ್ಷೆಗಳಿಗೆ ವಿರುದ್ಧವಾದ ಪರಿಕಲ್ಪನೆಯೊಂದಿಗೆ ವ್ಯವಹರಿಸಬೇಕು. ಸಂಕೀರ್ಣ ಪ್ರದರ್ಶನದಲ್ಲಿ ಪ್ರಸ್ತುತಪಡಿಸಲಾದ ಅನೇಕ ಮಾಹಿತಿಯ ತುಣುಕುಗಳ ನಡುವೆ ಅವರು ಮಾದರಿಗಳನ್ನು ಗುರುತಿಸುವ ಅಗತ್ಯವಿದೆ. PISA ೨೦೦೦ರಲ್ಲಿ ಸೇರಿಸಲಾದ ಹಲವು ಕಾರ್ಯಗಳಲ್ಲಿ ಇದು ಅತ್ಯಂತ ಕ್ಲಿಷ್ಟಕರವಾದ ಕಾರ್ಯವಾಗಿದೆ.

ಕೆಳಗಿನ ಕೋಷ್ಟಕವು ಪಠ್ಯಗಳ ವ್ಯಾಪ್ತಿಯನ್ನು, ಅಂಶವನ್ನು, ಮತ್ತು ಪ್ರತಿ ಪ್ರಶ್ನೆಯು ಮೌಲ್ಯಮಾಪನ ಮಾಡಲು ಉದ್ದೇಶಿಸಿರುವ ಓದುವ ರೀತಿಯನ್ನು  ಹೆಚ್ಚು ವಿವರವಾಗಿ  ಸಾರಾಂಶೀಕರಿಸುತ್ತದೆ.

ಉದಾಹರಣೆ	ಪಠ್ಯದ ಪ್ರಕಾರ	ಅಂಶ	ಪ್ರಶ್ನೆಯ ಉದ್ದೇಶ

ಗ್ರಾಫಿಟ್ಟೀ ವಾದಾತ್ಮಕ (ಗದ್ಯ) ಪಠ್ಯದ ವಿಷಯದ ಮೇಲೆ

ಯೋಚಿಸುವುದು

(ಪ್ರತಿಫಲಿಸುವುದು) ಮತ್ತು ಮೌಲ್ಯಮಾಪನ ಮಾಡುವುದು   ಪಠ್ಯದಲ್ಲಿ ವ್ಯಕ್ತಪಡಿಸಿದ ಅಭಿಪ್ರಾಯಗಳೊಂದಿಗೆ ಒಬ್ಬರ ವೈಯಕ್ತಿಕ ಅಭಿಪ್ರಾಯವನ್ನು ಹೋಲಿಸುವುದು

ದಿ ಗಿಫ್ಟ್ ನಿರೂಪಣೆ (ಗದ್ಯ) ಪಠ್ಯದ ಸ್ವರೂಪವನ್ನು ಕುರಿತು ಆಲೋಚಿಸುವುದು ಮತ್ತು ಮೌಲ್ಯಮಾಪನ ಮಾಡುವುದು ಇಡೀ ಪಠ್ಯದೊಂದಿಗೆ ಅದರ ಭಾಗದ ಸೂಕ್ತತೆಯ ಬಗ್ಗೆ ವಿಮರ್ಶಾತ್ಮಕವಾಗಿ ವ್ಯಾಖ್ಯೆ ಮಾಡುವುದು

ಲೇಬರ್ ವಿವರಣಾತ್ಮಕ (ಮರದ ರೇಖಾಚಿತ್ರ)  ಪಠ್ಯದ ಸ್ವರೂಪದ ಮೇಲೆ ಪ್ರತಿಫಲಿಸುವುದು ಮತ್ತು ಮೌಲ್ಯಮಾಪನ ಮಾಡುವುದು	ಒಂದು ವಸ್ತುವಿನ ರಚನೆಯನ್ನು ಅದರ ಉದ್ದೇಶಕ್ಕೆ ಸಂಬಂಧಿಸಿದಂತೆ ಮೌಲ್ಯಮಾಪನ ಮಾಡುವುದು

PLAN ಇಂಟರ್‌ನ್ಯಾಷನಲ್ ವಿವರಣಾತ್ಮಕ (ಟೇಬಲ್) ಪಠ್ಯದ ಸ್ವರೂಪದ ಮೇಲೆ ಪ್ರತಿಫಲಿಸುವುದು ಮತ್ತು ಮೌಲ್ಯಮಾಪನ ಮಾಡುವುದು	ನಿರೀಕ್ಷೆಗಳಿಗೆ ವಿರುದ್ಧವಾದ ಪಠ್ಯದ ಒಂದು ಅಂಶದ ಬಗ್ಗೆ ಪೂರ್ವಸಿದ್ಧಾಂತವನ್ನು ರಚಿಸುವುದು.

ತರಗತಿಯ ಶಿಕ್ಷಕರು ಈ ರೀತಿಯ ಮಾಹಿತಿಯನ್ನು ಹೇಗೆ ಬಳಸಬಹುದು? ತರಗತಿಯ ಬೋಧನೆಗಾಗಿ ಮತ್ತು ಶಿಕ್ಷಕರಿಗೆ ವೃತ್ತಿಪರ ಅಭಿವೃದ್ಧಿ ಗೋಷ್ಠಿಗಳಿಗಾಗಿ ಈ ಕೆಳಗಿನ ಕೆಲವು ಸಲಹೆಗಳಿವೆ:

- ಸಹಕಾರಿ ಅಥವಾ ಸ್ವತಂತ್ರ ವೃತ್ತಿಪರ ಬೆಳವಣಿಗೆಯ ಆಚರಣೆಯಾಗಿ, PISA ಬಿಡುಗಡೆ ಮಾಡಿದ, ಪ್ರತಿಫಲನ ಮತ್ತು ಮೌಲ್ಯಮಾಪನದ ಅಗತ್ಯವಿರುವ ವಸ್ತುವಿನ, ಇತರ ಉದಾಹರಣೆಗಳಿಗೆ ಉತ್ತರಿಸಲು ಅಗತ್ಯವಿರುವ ಕೌಶಲ್ಯಗಳ ವಿವರಣೆಯನ್ನು ಬರೆಯಿರಿ.

- ಸ್ಥಳೀಯ ಪಠ್ಯಕ್ರಮದ ಭಾಗವಾಗಿರುವ ಪಠ್ಯಗಳ ತರಗತಿಯ ಚರ್ಚೆಗೆ ಮಾದರಿಗಳಾಗಿ ಈ ಉದಾಹರಣೆಗಳನ್ನು ಬಳಸಿ.

•	PISA ಪ್ರಶ್ನೆಗಳನ್ನು ನಿರ್ದಿಷ್ಟ ತರಗತಿಯೊಂದಿಗೆ ಕಲಿಸಲಾಗುತ್ತಿರುವ ಪಠ್ಯಗಳಿಗೆ ಅಳವಡಿಸಿಕೊಳ್ಳಿ. ವಿದ್ಯಾರ್ಥಿಗಳು ಓದಿದ್ದರ ಬಗೆಗೆ  ಅವರಿಗಿರುವ ಆಲೋಚಿಸುವ ಮತ್ತು ಮೌಲ್ಯಮಾಪನ ಮಾಡುವ ಸಾಮರ್ಥ್ಯವನ್ನು ಕಂಡುಹಿಡಿಯಲು ಮತ್ತು ಅವರ ದೌರ್ಬಲ್ಯಗಳನ್ನು ಗುರುತಿಸಲು ಮೌಲ್ಯಮಾಪನ ಕಾರ್ಯಗಳಾಗಿ  ಬಳಸಿ.

•	ಒಂದು ತರಗತಿಯಲ್ಲಿ  ಈ ರೀತಿಯ ಕೆಲವು ಕಾರ್ಯಗಳನ್ನು ಬಳಸಿದ ನಂತರ, ವಿದ್ಯಾರ್ಥಿಗಳ ಪ್ರತಿಕ್ರಿಯೆಗಳನ್ನು ಸಹೋದ್ಯೋಗಿಯೊಂದಿಗೆ ಹಂಚಿಕೊಳ್ಳಿ ಮತ್ತು ಅವುಗಳನ್ನು ಹೇಗೆ ಗುರುತಿಸಬೇಕು ಮತ್ತು ಅವರು ಯಾವ ಕೌಶಲ್ಯ ಮತ್ತು ಸಾಮರ್ಥ್ಯಗಳನ್ನು (ಅಥವಾ ಕೊರತೆಗಳು) ಬಹಿರಂಗಪಡಿಸುತ್ತಾರೆ ಎಂಬುದರ ಕುರಿತು ಒಮ್ಮತಕ್ಕೆ ತಲುಪಿ.

•	ಶಿಕ್ಷಕರಿಗೆ ವೃತ್ತಿಪರ ಅಭಿವೃದ್ಧಿ ಗೋಷ್ಠಿಯನ್ನು ನಡೆಸಿ. ಅದರಲ್ಲಿ ಶಿಕ್ಷಕರು ತಮ್ಮಲ್ಲಿರುವ ಈ ರೀತಿಯ ಕಾರ್ಯಗಳನ್ನು ಹಂಚಿಕೊಳ್ಳಲಿ  ಮತ್ತು ಸಹೋದ್ಯೋಗಿಗಳು ಅಗತ್ಯವಿರುವ ಆಲೋಚನೆ ಮತ್ತು ಮೌಲ್ಯಮಾಪನದ ಪ್ರಕಾರ ಕಾರ್ಯಗಳನ್ನು ವರ್ಗೀಕರಿಸಲಿ.

PISA ೧೫ ವರ್ಷ ವಯಸ್ಸಿನವರನ್ನು ಮಾತ್ರ ಮೌಲ್ಯಮಾಪನ ಮಾಡಿದರೂ, ಇದು ಆರಂಭಿಕ ವರ್ಷದಿಂದ ವಯಸ್ಕ ಜೀವನದವರೆಗೆ ಪ್ರತಿಯೊಂದು ಹಂತದ ಶಿಕ್ಷಣವನ್ನು ಒಳಗೊಳ್ಳುವ ಓದುವ ವಿಧಾನ ಮತ್ತು ಸಾಮಾನ್ಯವಾಗಿ ಕಲಿಯುವ ವಿಧಾನವನ್ನು ಸೂಚಿಸುತ್ತದೆ. ಓದುವುದು ಯಾವುದೇ ಶೈಕ್ಷಣಿಕ ಕಾರ್ಯಕ್ರಮದ ಪ್ರಮುಖ ಭಾಗವಾಗಿರುವ ಒಂದು ಅಡಿಪಾಯ ಕೌಶಲ್ಯ. ಓದುವ ಮೂಲಕ ಕಲಿಸಿದ ಕೌಶಲ್ಯಗಳು ಮತ್ತು ವಿಧಾನಗಳನ್ನು ಪಠ್ಯಕ್ರಮದಾದ್ಯಂತ  ಎಲ್ಲಾವಿಷಯಗಳಿಗೆ ವರ್ಗಾಯಿಸಬಹುದು (OECD, ೨೦೦೯).

ಹೆಚ್ಚು ನಿಷ್ಕ್ರಿಯ ತಿಳಿವಳಿಕೆಯನ್ನು ಮತ್ತು ಗ್ರಹಿಸುವ ತಿಳುವಳಿಕೆಯನ್ನು ಒತ್ತಿಹೇಳುವ ರೀತಿಯಲ್ಲಿ, ಅಥವಾ ಚಿಂತನೆಯನ್ನು ವಿಸ್ತರಿಸಿ ಸವಾಲು ಒಡ್ಡುವಂತೆ ಓದುವಿಕೆಯನ್ನು ಕರಗತಮಾಡಿಕೊಳ್ಳಬಹುದು. PISA ಓದುವ ಸಾಕ್ಷರತೆಯು ಇವುಗಳಲ್ಲಿ ಎರಡನೆಯ ವಿಧಾನವನ್ನು ಆಯ್ಕೆ ಮಾಡುವುದರಿಂದ, ಅದರ ಮೌಲ್ಯಮಾಪನದ ಚೌಕಟ್ಟು ಮತ್ತು ಕಾರ್ಯಗಳನ್ನು ಪರಿಶೀಲಿಸುವುದರಿಂದ, ಅದು ಶಿಕ್ಷಕರಿಗೆ  ವಿಶೇಷವಾಗಿ ಸಹಾಯಕವಾಗಬಹುದಾದ ಹೊಳಹುಗಳನ್ನು ಒದಗಿಸಬಹುದು. ಈ ಹೊಳಹುಗಳು ಭಾರತೀಯ ವಿದ್ಯಾರ್ಥಿಗಳು ಸೃಜನಶೀಲತೆ ಮತ್ತು ಮೂಲ ಚಿಂತನೆಯಲ್ಲಿ ಹೆಚ್ಚು ಸಮರ್ಥರಾಗಲು ಸಹಾಯ ಮಾಡಬಹುದು.

ಉಲ್ಲೇಖಗಳು:


- Dhillon, A. (2009, July 11 2009). *India's tutor era. The Sunday Age.*
- Kirsch, I., deJong, J., Lafontaine, D., McQueen,J., Mendelovits, J., & Monseur, C. (2002). *Reading for change: Performance and engagement across countries: Results from PISA 2000 Paris: Organisation for Economic Co-operation and Development.*
- OECD. (1999). *Measuring Student Knowledge andSkills: A New Framework for Assessment.* Paris:OECD.

- OECD. (2006). *Assessing Scientific, Reading and Mathematical Literacy: A framework for PISA 2006.* Paris: OECD.

- OECD. (2009). *Take the test: sample questions from EOCD's PISA assessments.* Paris: OECD.

- OECD. (in press). *Reading Literacy: A framework for PISA 2009*. Draft presented to the PISA Governing Board, October 2007.



ಜೂಲಿಯಟ್ ಮೆಂಡೆಲೋವಿಟ್ಸ್ ಅವರು ಆಸ್ಟ್ರೇಲಿಯನ್ ಕೌನ್ಸಿಲ್ ಫಾರ್ ಎಜುಕೇಶನಲ್ ರಿಸರ್ಚ್‌ನಲ್ಲಿ ಪ್ರಮುಖ ಸಂಶೋಧನಾರ್ಥಿ(Research fellow) ಆಗಿದ್ದಾರೆ ಮತ್ತು ಇಂಟರ್‌ನ್ಯಾಷನಲ್ ಸ್ಟೂಡೆಂಟ್ ಅಸೆಸ್‌ಮೆಂಟ್ (PISA) ಕಾರ್ಯಕ್ರಮಕ್ಕಾಗಿ ಓದುವ ಸಾಕ್ಷರತೆಯ ಕ್ಷೇತ್ರ ನಾಯಕರಾಗಿದ್ದಾರೆ. ಅವರು PISA ೨೦೦೦ ಇದಕ್ಕಾಗಿ ಬದಲಾವಣೆಗಾಗಿ ಓದುವಿಕೆ: ದೇಶಾದ್ಯಂತ ಪ್ರದರ್ಶನ ಮತ್ತು ತೊಡಗಿಸಿಕೊಳ್ಳುವಿಕೆ (OECD, ೨೦೦೨) ಎಂಬ ಓದುವ ಸಾಕ್ಷರತೆಯ ವರದಿಯ ಸಹ-ಲೇಖಕಿಯಾಗಿದ್ದಾರೆ. ಅವರನ್ನು ಇಲ್ಲಿ ಸಂಪರ್ಕಿಸಬಹುದು-

mendelovits@acer.edu.au